

# ಶ್ರೀ ಶಂಕರಾಚಾರ್ಯ ವಿರಚಿತ
# ಅಷ್ಟಕತ್ರಯವು

(ಧನ್ಯಾಷ್ಟಕ, ಶುಕಾಷ್ಟಕ, ತತ್ವಮಸ್ಯಷ್ಟಕ)



ಅನುವಾದಕರು :

ಅದ್ವೈತ ಶಿಖಾಮಣಿ ಬ್ರ|| ಶ್ರೀ|| ಶಿವಾನಂದಸ್ವಾಮಿಜಿಯವರು

ಪ್ರಕಾಶಕರು :

ದಿವಂಗತ ಎ. ಕೃಷ್ಣಯ್ಯ ಶೆಟ್ಟರ ಧರ್ಮಪತ್ನಿ

ಶ್ರೀಮತಿ ವೆಂಕಟರತ್ನಮ್ಮನವರು

ಬೆಲೆ : ೫೦ ಪೈಸೆ.



ಅದ್ವೈತಶಿಖಾಮಣಿ
ಬ್ರಂ|| ಶ್ರೀ|| ಶಿವಾನಂದಸ್ವಾಮಿಜಿ
ಅನುವಾದಕರು.



ಶ್ರೀಯುತ ಎ. ಕೃಷ್ಣಯ್ಯ ಶೆಟ್ಟರು

ನೀವು ನಮ್ಮನ್ನಗಲಿ ಒಂದು ವರ್ಷವಾಯಿತು. ನಿಮ್ಮ ಸವಿ ನೆನಪು ಸದಾಕಾಲವು ನಮ್ಮಲ್ಲಿ ಸ್ಥಿರವಾಗಿದೆ. ನಿಮ್ಮ ಆತ್ಮಕ್ಕೆ ಶಾಂತಿಕೋರುವ,

ಪತ್ನಿ ಪುತ್ರರು.

# ಸ್ಮರಣೆ

ಶ್ರೀಯುತ ದಿವಂಗತ ಎ. ಕೃಷ್ಣಯ್ಯಶೆಟ್ಟರು ನನಗೆ ಚಿರಪರಿಚಿತರು. ಅವರ ವಾರ್ಷಿಕಾಬ್ದಿಯಲ್ಲಿ ಅವರ ಸವಿ ನೆನಪುಗಳನ್ನು ಸ್ಮರಿಸಬೇಕಾದ್ದು ನಮ್ಮ ಕರ್ತವ್ಯವಾಗಿರುತ್ತದೆ.

ದಿವಂಗತ ಕೃಷ್ಣಯ್ಯ ಶೆಟ್ಟರು ಶಿವಾಜಿನಗರದಲ್ಲಿ ಸುಪ್ರಸಿದ್ಧ ವರ್ತಕ ರಾಗಿದ್ದರು; ಧರ್ಮಪ್ರವರ್ತಕರೂ ಆಗಿದ್ದರು. ಅವರು ದೇವಸ್ಥಾನಗಳಿಗೂ, ಮಠಗಳಿಗೂ, ಛತ್ರಗಳ ಕಟ್ಟಡಕ್ಕೂ, ಬ್ರಾಹ್ಮಣರ ಅನ್ನ ಸಂತರ್ಪಣೆಗಳಿಗೂ, ಮದುವೆ, ಮುಂಜಿ ಕಾರ್ಯಗಳಿಗೂ ಉದಾರವಾಗಿ ದಾನ ಮಾಡಿರುವರು. ಅವರು ತೀರ ಸರಳ ಸ್ವಭಾವದವರು, ಕಾಯಕವೇ ಕೈಲಾಸವೆಂದು ದುಡಿ ದವರು, ಅತಿಥಿ, ಅಭ್ಯಾಗತರ ಸೇವೆ ಸಲ್ಲಿಸಿರುವರು. ಭಾರ್ಯ ಸಮೇತ ಸಂಪೂರ್ಣ ತೀರ್ಥ ಯಾತ್ರೆಗಳನ್ನು ಮಾಡಿರುವರು. ಅದಲ್ಲದೆ ಸರ್ವಕ್ಕೂ ಹೆಚ್ಚಾಗಿ 40 ವರ್ಷಗಳಿಂದಲೂ ಆಧ್ಯಾತ್ಮ ಶ್ರವಣಕ್ಕಾಗಿ ತಮ್ಮ ಮನೆಯನ್ನೇ ಮೀಸಲಾಗಿಟ್ಟಿದ್ದರು. ಒಟ್ಟಿನಲ್ಲಿ ಹೇಳುವುದಾದರೆ ಓರ್ವ ಆದರ್ಶ ಪುರುಷ ರಾಗಿದ್ದರು. ಅವರ ಭಾರ್ಯ ಶ್ರೀಮತಿ ವೆಂಕಟರತ್ನಮ್ಮನವರು ತಮ್ಮ ಪತಿಯ ಧರ್ಮ ಕಾರ್ಯದ ಪ್ರಚೋದಕರಾಗಿದ್ದರು. ಸಕಲ ಸತ್ಕಾರ್ಯ ಗಳಿಗೂ ಸಹಕರಿಸುತ್ತಿದ್ದರು. ಆಧ್ಯಾತ್ಮ ವಿಷಯದ ಪ್ರಬೋಧಕರಾಗಿದ್ದರು. ಸದಾ ತಮ್ಮ ಹಿತಚಿಂತಕರಾಗಿದ್ದರು. ಅವರ ವಚನಗಳೆಲ್ಲವನ್ನೂ ವಿಧಿವಾಕ್ಯ ದಂತೆ ಅನುಸರಿಸುತ್ತಲಿರುವರು. ತಮ್ಮ ಸ್ಮರಣಾರ್ಥಕ್ಕಾಗಿ ಈ ಧನ್ಯಾಷ್ಟಕ ವನ್ನು ಅಚ್ಚುಗೊಳಿಸಿರುವರು.

ಪೂರ್ಣಪರಮಾತ್ಮನು ಇವರ ಕುಟುಂಬವರ್ಗಕ್ಕೆ ಆಯುರಾರೋಗ್ಯ ಭಾಗ್ಯವನ್ನಿತ್ತು ಕರುಣಿಸಲಿ. ದಿವಂಗತ ಎ. ಕೃಷ್ಣಯ್ಯ ಶೆಟ್ಟರ ಆತ್ಮಕ್ಕೆ ಸ್ಥಿರ ಚಿರ ಶಾಂತಿ ದೊರಕಲಿ. ಈ ಪುಟ್ಟ ಪುಸ್ತಕದಿಂದ ಯಾರಿಗಾದರೂ ಯತ್ಕಿಂಚಿತ್ತಾದರೂ ಸುಖ ಶಾಂತಿ ಸಿಕ್ಕಿದರೆ ನನ್ನ ಶ್ರಮ ಸಾರ್ಥಕವೆಂದು ಭಾವಿಸುತ್ತೇನೆ.

ಅದ್ವೈತಶಿಖಾಮಣಿ
ಬ್ರಂ. ಶ್ರೀ ಶಿವಾನಂದಸ್ವಾಮಿಜಿ

|| ಶ್ರೀ ||



ಶಂಕರಂ ಶಂಕರಾಚಾರ್ಯಂ ಕೇಶವಂ ಬಾದರಾಯಣಂ |
ಸೂತ್ರಭಾಷ್ಯಕೃತೌವಂದೇ ಭಗವಂತೌ ಪುನಃ ಪುನಃ ||

# ಧನ್ಯಾಷ್ಟಕ

ಶ್ಲೋಕ || ತಜ್ಞಾನಂ ಪ್ರಶಮಕರಂ ಯದಿಂದ್ರಿಯಾಣಾಂ |
ತಜ್ಞೇಯಂ ಯದುಪನಿಷತ್ಸು ನಿಶ್ಚಿತಾರ್ಥಂ ||
ತೇ ಧನ್ಯಾ ಭುವಿ ಪರಮಾರ್ಥನಿಶ್ಚಿತೇಹಾಃ |
ಶೇಷಸ್ತು ಭ್ರಮನಿಲಯೆ ಪರಿಭ್ರಮಂತ್ತಿ || ೧ ||

**ಭಾವಾರ್ಥ** : ಇಂದ್ರಿಯಂಗಳಿಗೆ ಶಾಂತಿಯನ್ನುಂಟುಮಾಡುವುದೇ ಜ್ಞಾನ. ಇಂದ್ರಿಯಗಳು ವಿಷಯಾದಿಗಳಿಂದ ಹಿಂತಿರುಗಬೇಕು ಆಗ ಅದಕ್ಕೆ ಸರಿಯಾದ ಜ್ಞಾನವೆಂದರಿಯಬೇಕು. ಏಕೆಂದರೆ, ಜ್ಞಾನಕ್ಕೆ ಸಾಧನವಾಗಿರುವುದರಿಂದ ಉಪನಿಷತ್ತುಗಳಲ್ಲಿ ನಿಶ್ಚಯಿಸಲ್ಪಟ್ಟ ವಸ್ತುವನ್ನೇ ಜ್ಞೇಯವೆಂದು ತಿಳಿಯಬೇಕು. ಏಕೆಂದರೆ, ಆತ್ಮ ವಾಕ್ಕಿಗೂ ಮನಸ್ಸಿಗೂ ಅಗೋಚರನಾಗಿರುತ್ತಾನೆ. ಹೀಗೆ ಯತಾರ್ಥವಾದ ನಿಶ್ಚಯವುಳ್ಳವರು

ಯಾರೋ ಅವರೇ (ಜೀವನ್ಮುಕ್ತರು) ಜಗತ್ತಿನಲ್ಲಿ ಧನ್ಯರು. ಮಿಕ್ಕವರೆಲ್ಲರೂ ಭ್ರಾಂತಿರೂಪವಾದ ಜಗತ್ತಿನಲ್ಲಿ ಸತ್ತು ಹುಟ್ಟುವರೆಂದು ತಿಳಿಯಬೇಕು.

**ವಿಶೇಷಾರ್ಥ :** ಯಾರ ಇಂದ್ರಿಯಗಳು ವಿಷಯಾದಿಗಳಿಂದ ಹಿಂತಿರುಗುವುದಿಲ್ಲವೋ ಅವರ ಪ್ರಜ್ಞೆಯು ಸ್ಥಿರವಾಗಿ ನಿಲ್ಲುವುದಿಲ್ಲವೆಂದು ಭಗವಂತನೂ ಸಹ ಹೇಳಿರುವನು. —ಭ|| ಗೀ|| ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯಪ್ರಜ್ಞಾ ಪ್ರತಿಷ್ಠಿತ || —ಅ 2 ಶ್ಲೋ. 58–68. ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ.–ಅ. 3 ಶ್ಲೋ 41. ಆತ್ಮನು ಔಪನಿಷದ್ಗಮ್ಯನೆಂದು ಹೇಳಿರುತ್ತೆ. ಆದಕಾರಣ ಉಪನಿಷತ್ಪ್ರಮಾಣಗಳನ್ನು ಮುಂದಿಟ್ಟುಕೊಂಡೇ ಆತ್ಮನ ವಿಚಾರ ಮಾಡಬೇಕು.

**ಶ್ರುತಿ :** ತಂತ್ವೌಪನಿಷದಂ ಪುರುಷಂ ಪೃಚ್ಛಾಮಿ || ಬೃ ||

**ಸೂತ್ರ :** ಶಾಸ್ತ್ರಯೋನಿತ್ವಾತ್—ಬ್ರಹ್ಮಸೂತ್ರ, 3ನೇ ಅಧಿಕರಣ, 3ನೇ ಸೂತ್ರ.

**ಗೀತಾ :** ವೇದೈಶ್ಚಸರ್ವೈರಹಮೇವವೇದ್ಯ || ಅ. 15. ಶ್ಲೋ. 15

**ಸಾರಾರ್ಥ :** ವಿವೇಕಿಗಳು ಸುಖ, ಶಾಂತಿಗಾಗಿ ಆಧ್ಯಾತ್ಮವಿದ್ಯೆಯನ್ನರಿಯಬೇಕು. ಆಕಾಶದಂತೆ ಪ್ರಪಂಚದಲ್ಲಿ ನಿರ್ಲಿಪ್ತರಾಗಿರಬೇಕು.

**ಶ್ಲೋಕ :** ಆದೌ ವಿಜಿತ್ಯ ವಿಷಯಾನ್ ಮದಮೋಹ ರಾಗ |
ದ್ವೇಷಾದಿ ಶತ್ರುಗಣಮಾಹೃತ ಯೋಗ ರಾಜ್ಯಃ |
ಜ್ಞಾತ್ವಾಮೃತಂ ಸಮನುಭೂಯ ಪರಾತ್ಮವಿದ್ಯಾ |
ಕಾಂತಾಸುಖಂ ವನಗೃಹೇ ವಿಹರಂತಿ ಧನ್ಯಾ || ೨ ||

**ಭಾವಾರ್ಥ :** ಮದ, ಮೋಹ ಮತ್ತು ರಾಗದ್ವೇಷಾದಿಗಳೇ ಶತ್ರುಗಳು. ಈ ಶತ್ರುಸಮೂಹದಿಂದಲೇ ಯೋಗ್ಯರಾಜವು ಮುಚ್ಚಿಹೋಗಿರುತ್ತೆ. ಆದ

ಕಾರಣ ಮೊದಲು ಶಬ್ದಾದಿ ವಿಷಯಗಳನ್ನು ಗೆಲ್ಲಬೇಕು. ಯೋಗ್ಯ ರಾಜವನ್ನು ಪಡೆಯಬೇಕು. ಅಮೃತಸ್ವರೂಪನಾದ ಆತ್ಮನನ್ನು ಅರಿಯಬೇಕು. ನಂತರ ಆತ್ಮ ಸುಖವನ್ನನುಭವಿಸಬೇಕು. ವನವೆಂಬ ಗೃಹದಲ್ಲಿ ಪರಾತ್ಮ ವಿದ್ಯೆಯೆಂಬ ಸ್ತ್ರೀಯೊಡನೆ ಕೂಡಿ ಸುಖಿಸಬೇಕು. ಹೀಗೆ ಸುಖಾನುಭವವನ್ನು ಅನುಭವಿಸುತ್ತಾ ವಿಹರಿಸುವವನೇ ಧನ್ಯನೆಂದರಿಯಬೇಕು.

**ವಿಶೇಷಾರ್ಥ :** ಶಬ್ದಾದಿ ಪಂಚವಿಷಯಗಳು ದುಃಖಕ್ಕೆ ಕಾರಣವಾಗಿರುತ್ತೆ. ಆದ ಕಾರಣ ಅವನ್ನು ವಿಷಕ್ಕೆ ಸಮಾನವೆಂದರಿತು ಬಿಡಬೇಕು. ತಿಳಿದವರು ವಿಷಯಗಳಲ್ಲಿ ರಮಿಸುವುದಿಲ್ಲ. " ನತೇಷು ರಮತೇ ಬುಧಃ " –ಗೀ|| ಅ. 5. ಶ್ಲೋ. 22. ಶಬ್ದಾದಿ ವಿಷಯಗಳಿಂದ ಆಗುವ ಅನರ್ಥವನ್ನು ಅರಿತು ತತ್ವವೇತ್ತರು ಅದರಲ್ಲಿ ರಮಿಸುವುದಿಲ್ಲ.

" ಮಾತಂಗೋರತಿಭೇದಶ್ಚ ಪತಂಗೋ ದೃಷ್ಟಿಭೇದತಃ |
ಭೃಂಗಶ್ಚ ಗಂಧಸಂಯೋಗತ ಕುರಂಗೋ ಶಬ್ದಾನುರಾಗಶ್ಚ |
ಮತ್ಸ್ಯಾನಿಶ್ಚ ಜಿಹ್ವಾಲಾಂಪಟ್ಯಾತ್ ಏಕೈಕೇಂದ್ರಿಯತೋಹತಃ |
ಪಂಚೇಂದ್ರಿಯ ಸಮಾಯುಕ್ತ ಮನುಷ್ಯಾಣಾಂಹಿ ಕಾಕಥಃ "
" ಇಂದ್ರಿಯಾಭ್ಯಾಂ ಅಜಯಾಭ್ಯಾಂ ದ್ವಾಭ್ಯಾಮೇವಹತಂ ಜಗತ್ |
ಅಹೋಜಿಹ್ವಾ ಉಪಸ್ತಹನನಂ ಬ್ರಹ್ಮಾದಿಮಶಕ ಪರಿಯಂತರಂ " ||

ಈ ಪೂರ್ವೋಕ್ತ ಪ್ರಮಾಣಗಳಿಂದಲೂ, ಲೋಕಾನುಭವದಿಂದಲೂ ಪಂಡಿತರು ಶಬ್ದಾದಿ ವಿಷಯಂಗಳಲ್ಲಿ ರಮಿಸುವುದಿಲ್ಲ. ಆದಕಾರಣ ಆರುರುಕ್ಷುಗಳು (ಸಾಧಕರು) ಮೊದಲು ಇಂದ್ರಿಯಂಗಳನ್ನು ಹಿಡಿತದಲ್ಲಿಟ್ಟುಕೊಳ್ಳಬೇಕು. " ತಸ್ಮಾತ್ತ್ವಮಿಂದ್ರಿಯಾಣ್ಯಾದೌನಿಯಮ್ಯ ಭರತರ್ಷಭಃ" —ಗೀ|| ಅ. 3. ಶ್ಲೋ. 41. ಇಂದ್ರಿಯಾರ್ಥೇಷು ವೈರಾಗ್ಯಂ " ತ್ರಿಶಿಖಿ " —ಗೀ|| ಅ.13. ಶ್ಲೋ. 8. ಕಾಮ, ಕ್ರೋಧ, ಮದ, ಮೋಹಾದಿಗಳನ್ನು ಗೆಲ್ಲುವುದಕ್ಕೆ ಇಂದ್ರಿಯನಿಗ್ರಹವೇ ಮೊದಲ ಸಾಧನೆಯಾಗಬೇಕು.

" ದಿಗಂಬರೋವಾಪಿ ಚ ಸಾಂಬರೋ ವಾ ತ್ವಗಂಬರೋವಾಪಿ
ಚಿದಂಬರಸ್ಥ ಉನ್ಮತ್ತವದ್ವಾಪಿಚ ಬಾಲವದ್ವಾ
ಪಿಶಾಚವದ್ವಾಪಿಚರತ್ಯಪನ್ಯಾಂ ನಿರ್ಧನೋ ಸದಾ
ತುಷ್ಟೋಪ್ಯಸಹಾಯೋ ಮಹಾಬಲಃ ನಿತ್ಯತೃಪ್ತೋಪ್ಯಬುಙ್ಜ
ನೋಪ್ಯಸಮಸ್ಸಮದರ್ಶನಃ || ವಿ|| ಚೂ||

**ಸಾರಾರ್ಥ :** ಸಾಧಕರು : ದೇಹವಾಸನ, ಲೋಕವಾಸನ, ಶಾಸ್ತ್ರ ವಾಸನ ಬಿಡಬೇಕು. ಪುತ್ರೇಷಣ, ದಾರೇಷಣ, ಧನೇಷಣ ತ್ಯಜಿಸಬೇಕು

**ಶ್ಲೋಕ ||** ತ್ಯಕ್ತ್ವಾ ಗೃಹೇರತಿಮಧೋಗತಿಹೇತುಭೂತಾ |
ಮಾತ್ಮೇಚ್ಛ ಮೌಪನಿಷದರ್ಥರಸಂಪಿಬಂತಂ |
ವೀತಸ್ಪೃಹಾ ವಿಷಯಭೋಗಪದೇವಿರಕ್ತಾಃ |
ಧನ್ಯಾಶ್ಚರನ್ತಿ ವಿಜನೇಷು ವಿರಕ್ತ ಸಂಗಾಃ || ೩ ||

**ಭಾವಾರ್ಥ :** ಸಂಸಾರ ಸುಖವು ಅಧೋಗತಿಗೆ ಕಾರಣವಾದ ಮನೆಯಾಗಿರುತ್ತೆ. ಆದ ಕಾರಣ ಅದನ್ನು ಬಿಡಬೇಕು. ಔಪನಿಷದ್ಗಮ್ಯನಾದ ಆತ್ಮನನ್ನು ತಿಳಿಯಲು ಇಚ್ಛಿಸಬೇಕು. ವಿಷಯಸುಖದಲ್ಲಿ ವೈರಾಗ್ಯವನ್ನು ಹೊಂದಬೇಕು. ತಾರ್ಕಿಕ ಜನರ ಸಮೂಹ ( ಸಂಗ )ವನ್ನು ಬಿಡಬೇಕು. ಆತ್ಮಾನಂದವನ್ನು ಪಡೆದು ತೃಪ್ತನಾಗಬೇಕು. ಹೀಗಿರುವವರೇ ಧನ್ಯರು.

**ವಿಶೇಷಾರ್ಥ ;** ಸಂಸಾರದಲ್ಲಿ ಸುಖವಿಲ್ಲ, ಸಂಸಾರದಿಂದ ದುಃಖವೇ ಹೊರತು ಬೇರೊಂದಿಲ್ಲ. " ದುಃಖಾಲಯಮಶಾಶ್ವತಂ " –ಗೀ|| ಅ. 8 ಶ್ಲೋ. 15. ಸಂಸಾರವು ಅಧೋಗತಿಗೆ (ಜನನ ಮರಣಗಳಿಗೆ) ಕಾರಣವಾಗಿರುತ್ತೆ. " ಅಧೋಗಚ್ಛಂತಿ ತಾಮಸಾಃ "–ಗೀ|| ಅ. 14. ಶ್ಲೋ 18 " ಪ್ರಸಕ್ತಾ: ಕಾಮಭೋಗೇಷು ಪತಂತಿನರಕೇಽಶುಚೌ " –ಗೀ|| ಅ. 16 ಶ್ಲೋ. 16. ಪೂರ್ವೋಕ್ತ ಪ್ರಮಾಣಗಳಿಂದ ಸಂಸಾರದಲ್ಲಿ ವಿರಕ್ತನಾಗಬೇಕು. ಆಗ ಅವನು ಜೀವನ್ಮುಕ್ತನಾಗುವನು. " ಅಹಂಕಾರ ಸುತಂ

ವಿತ್ತಂ ಭ್ರಾತರಂ ಮೋಹಮಂದಿರಂ| ಆಶಾ ಪತ್ನಿತ್ಯಜೇತ ಯಾವತ್ ತಾವನ್ಮೃ ಕ್ತೋನಸಂಶಯಃ " —ಮೈ||ಆದಿ ಮಧ್ಯಾವಸಾನದಲ್ಲೂ ದುಃಖಜನಕವಾದ್ದ ರಿಂದ ಭೋಗೇಚ್ಛ ತ್ಯಜಿಸಬೇಕು. ಆತ್ಮೇಚ್ಛಾ ಬಲ್ಲವರು ವೃದ್ಧಿಮಾಡಿಕೊಳ್ಳ ಬೇಕು. "ಆದಿಮಧ್ಯಾವಸಾನೇಷು ದುಃಖಂ ಸರ್ವಮಿದಂಯತಃ "—ಮಹಾ ವಾಖ್ಯರತ್ನಾವಳಿ. "ಅಸಕ್ತಿರನಭಿಷ್ವಂಗಃ ಪುತ್ರದಾರಾ ಗೃಹಾದಿಷು"—ಗೀ|| ಅ 13. ಶ್ಲೋ. 9 ಸಂಸಾರವು ದುಃಖಕ್ಕೆ ಕಾರಣವಾಗಿರುತ್ತೆ. ಆದ ಕಾರಣ ಮುಮುಕ್ಷುಗಳು ಧೃಡ ವೈರಾಗ್ಯವುಳ್ಳವರಾಗಬೇಕು. ಆಧ್ಯಾತ್ಮ ವಿದ್ಯೆಯಲ್ಲಿ ಧೃಡವ್ರತವುಳ್ಳವರಾಗಬೇಕು. ಆತ್ಮ ಕ್ರೀಡ, ಆತ್ಮರತಿ, ಆತ್ಮ ತೃಪ್ತಿ ಉಳ್ಳವರಾಗಿರಬೇಕು.

**ಸಾರಾರ್ಥ :** ಸಾಧಕನು ಹೊರಗಿನ ಸುಖದಲ್ಲಿ ಆಸಕ್ತನಾಗದೇ ಆತ್ಮ ಸುಖವನ್ನೇ ಹೊಂದಬೇಕು. ಅದನ್ನು ಪಡೆಯಲು ಸದಾ ಆತ್ಮ ಬುದ್ಧಿ ಯುಳ್ಳವನಾಗಿರಬೇಕು. ನಿತ್ಯ ನಿರಂತರದಲ್ಲಿ ಆತ್ಮವ್ಯವಸಾಯದಲ್ಲೇ ಸ್ಥಿರಚಿತ್ತವುಳ್ಳವನಾಗಿರಬೇಕು.

**ಶ್ಲೋಕ :** **ತ್ಯಕ್ತ್ವಾಮಮಾಹಮಿತಿ ಬಂದಕರೇ ಪದೆದ್ವೇ**
**ಮಾನಾಪಮಾನ ಸದೃಶಾಃ ಸಮದರ್ಶಿನಶ್ಚ**
**ಕರ್ತಾರಂ ಅನ್ಯಂ ಅವಗಮ್ಯತದರ್ಪಿತಾನಿ**
**ಕುರ್ವನ್ತಿ ಕರ್ಮಪರಿಪಾಕ ಫಲಾನಿಧನ್ಯಾ ॥ ೪ ॥**

**ಭಾವಾರ್ಥ :** ಬಂಧನಕ್ಕೆ ಕಾರಣವಾದ ನಾನು ನನ್ನದೆಂಬ ಅಭಿ ಮಾನವನ್ನು ಬಿಡಬೇಕು. ಮಾನಾಪಮಾನಗಳನ್ನು ಸಮಾನವಾಗಿ ತಿಳಿಯ ಬೇಕು. ಸಮದರ್ಶಿಯಾಗಿರಬೇಕು. ತಾನು ಕರ್ತನಲ್ಲವೆಂದು ತಿಳಿಯ ಬೇಕು. ಮಾಡಿದ ಕರ್ಮಫಲಗಳನ್ನು ಈಶ್ವರನಿಗರ್ಪಿಸಬೇಕು. ಹೀಗಿರು ವವರೇ ಲೋಕದಲ್ಲಿ ಧನ್ಯರು.

**ವಿಶೇಷಾರ್ಥ :** ದೇಹದಲ್ಲಿ ನಾನೆಂಬ ಅಭಿಮಾನವನ್ನು ದೇಹ ಸಂಬಂಧವಾದ ಪತ್ನಿ ಪುತ್ರಾದಿಗಳಲ್ಲಿ ನನ್ನವರೆಂಬ ಅಭಿಮಾನವನ್ನು ಬಿಡ

ಬೇಕು. ಏಕೆಂದರೆ ದೇಹವು ನಾನೂ ಅಲ್ಲ. ' ನಾಹಂದೇಹೋ ", ದೇಹ ಸಂಬಂಧವು ನನ್ನದೂ ಅಲ್ಲ. ಇವುಗಳೆಲ್ಲವನ್ನೂ ಪಾದಧೂಳಿಯಂತೆ ಬಿಟ್ಟು ಬಿಡಬೇಕು. " ದೇಹಜಾತ್ಯಾದಿ ಸಂಬಂಧಾನ್ ವರ್ಣಾಶ್ರಮ ಸಮನ್ವಿತಾನ್ ತದ್ಭೇದ ವೇದಶಾಸ್ತ್ರಾನ್ ಪದಪಾಂಸುಮಿವಪರಿತ್ಯಜೇತ್|–ತೇಜೋಬಿಂದು ನಾನು ನನ್ನದೆಂಬ ಅಭಿಮಾನವು ಭ್ರಾಂತಿಯಿಂದ ಆಗಿರುತ್ತೆ. ಬಂದಪಾದಕತ್ವಾತ್ ಅಹಂಕರೋಮಿ ಕಾರಯಾಮಿ. ಭೋಕ್ಷ್ಯೇ ಭೋಜಯಾಮಿ ಇತ್ಯೇವಂ ಮೋಹಂಗಚ್ಛನ್ತಿ ಅವಿವೇಕಿನ ಸಂಸಾರಿಣೋಜನ್ತವಃ ||
—ಶಂ. ಭಾಷ್ಯ 353

ಅಹಂಕಾರ ವಿಮೂಢಾತ್ಮ ಕರ್ತಾಹಮಿತಿಮನ್ಯತೆ | –ಗೀ| ಅ. 3. ಶ್ಲೋ 27.

ಅಜ್ಞಾನೇನಾ ವೃತಂಜ್ಞಾನಂತೇನಮುಹ್ಯನ್ತಿ ಜಂತವಃ| –ಗೀ| ಅ. 5 ಶ್ಲೋ 15
ನಾನು ನನ್ನದು ಎಂಬ ಮೋಹವರ್ಜಿತರು ಮುಕ್ತಿ ಹೊಂದುವರು.

ನಿರ್ಮಮೋನಿರಹಂಕಾರ ಸ್ಸಶಾಂತಿಮಧಿಗಚ್ಛತಿ||—ಗೀ| ಅ. 2 ಶ್ಲೋ. 71
ತತ್ವವೇತ್ತನು ಸರ್ವರಲ್ಲೂ ಸಮಾನದೃಷ್ಟಿವುಳ್ಳವನಾಗಿರಬೇಕು.

ವಿದ್ಯಾವಿನಯ ಸಂಪನ್ನೇ ಬ್ರಾಹ್ಮಣೆ ಗವಿ ಹಸ್ತಿನಿ ಶುನಿಚೈವಶ್ವಪಾಕೇಚ ಪಂಡಿತ್ಸಾಃ ಸಮದರ್ಶಿನಃ || —ಗೀ|| ಅ. 5 ಶ್ಲೋ 18.
ತತ್ತ್ವವೇತ್ತನು ಮಾನಾವಮಾನಗಳಲ್ಲಿ ಸಮಚಿತ್ತನಾಗಿರಬೇಕು.

"ಸಮಶತ್ರೌಚ ಮಿತ್ರೇಚ ತಥಾ ಮಾನಾಪಮಾನಯೋಃ ||
—ಗೀ| ಅ. !2 ಶ್ಲೋ 18.

ಮುಕ್ತನ ಶುಭಾಶುಭಕರ್ಮಗಳು ಅವನಿಗಾಗಿ ಆಗಬೇಕು.

"ತದರ್ಥಂ ಕರ್ಮ ಕೌಂತೇಯ " —ಗೀ| ಅ. 3. ಶ್ಲೋ 9.

"ತತ್ತ್ಕುರುಷ್ವಮದರ್ಪಣಂ " —ಗೀ| ಅ. 9. ಶ್ಲೋ 27.

**ಸಾರಾರ್ಥ :** ತತ್ತ್ವವೇತ್ತನು ದೇಹ ಬಿಡುವ ಪರ್ಯಂತರ ನಾನು ನನ್ನದು ಎಂಬ ಅಭಿಮಾನವನ್ನು ಬಿಟ್ಟಿರುವನು. ಸಮದರ್ಶಿಯಾಗಿರುವನು. ಫಲಾಫಲಗಳನ್ನು ತ್ಯಜಿಸಿರುವನು. ಒಣಗಿದ ಗಿಟಕಿನಂತೆ ಇರುವನು.

**ಶ್ಲೋಕ ||** ತ್ಯಕ್ತ್ವೈಷಣಾತ್ರಯಮವೇಕ್ಷಿತ ಮೋಕ್ಷಮಾರ್ಗಾ
ಭೈಕ್ಷಾಮೃತೇನ ಪರಿಕಲ್ಪಿತದೇಹಯಾತ್ರಾಃ
ಜ್ಯೋತಿಃಪರಾತ್ಪರತರಂ ಪರಮಾತ್ಮಸಂಜ್ಞಂ
ಧನ್ಯಾದ್ವಿಜಾರಹಸಿ ಹೃದ್ಯವಲೋಕಯಂತಿ || ೫ ||

**ಭಾವಾರ್ಥ :** ಮೋಕ್ಷಮಾರ್ಗಾವಲಂಬಿಗಳು ಈಷಣತ್ರಯಗಳನ್ನು ಬಿಟ್ಟುಬಿಡಬೇಕು. ಭಿಕ್ಷಾನ್ನಾಮೃತದಿಂದ ದೇಹವನ್ನು ರಕ್ಷಿಸಿಕೊಳ್ಳಬೇಕು. ಪರಮಾತ್ಮ ಸಂಜ್ಞೆಯುಳ್ಳ ಪರಾತ್ಪರ ಜ್ಯೋತಿರೂಪ. ಇಂತಹ ಪರಮಾತ್ಮನನ್ನು ಹೃದಯದಲ್ಲಿ ತಿಳಿದು ಧ್ಯಾನಿಸುತ್ತಿರಬೇಕು. ಇವರೆ (ದ್ವಿಜರು) ಲೋಕದೊಳು ಧನ್ಯರು.

**ವಿಶೇಷಾರ್ಥ :** ಮೋಕ್ಷಮಾರ್ಗಕ್ಕೆ ಈಷಣತ್ರಯ ಅಡ್ಡಿಯಾಗಿರುತ್ತೆ. ಈಷಣತ್ರಯವೆಂದರೆ ಪತ್ನಿ, ಪುತ್ರ, ಧನ ಇವುಗಳಲ್ಲಿಟ್ಟಿರುವ ಪ್ರೀತಿ. ಇವುಗಳನ್ನು ಬಿಡದ ವಿನಃ ತತ್ವಜ್ಞಾನವಾಗದು. ಆದ ಕಾರಣ ಇವುಗಳನ್ನು ಬಿಡಬೇಕು.

"ತಸ್ಮಾತ್ ಏತತ್‌ತ್ರಯಂತ್ಯಜೇತ"
"ತಸ್ಮಾತ್ಸರ್ವಂ ಪರಿತ್ಯಜ್ಯ ತತ್ತ್ವನಿಷ್ಠೋಭವಾನಘ"
—ಅವಧೂತ ಉಪನಿಷತ್.

ಭಿಕ್ಷಾನ್ನ ಮಾತ್ರದಿಂದ ಸಂತುಷ್ಟನಾಗಬೇಕು. (ಯತಿ ಭಿಕ್ಷಾ) – ಮಧುಕರಿ, ಅಸಂಕ್ಲುಪ್ತ, ಅಯಾಚಿತ, ತಾತ್ಕಾಲಿಕ, ಉಪಪನ್ನ. ತತ್ತ್ವವೇತ್ತನು ಸಿಕ್ಕಿದ್ದರಲ್ಲಿ ತೃಪ್ತನಾಗಬೇಕು. ಸುಖ, ದುಃಖ, ಶೀತೋಷ್ಣಾದಿ ದ್ವಂದ್ವಗಳ

ಸಹನೆ ಮಾಡಿಕೊಳ್ಳಬೇಕು. ಈರ್ಷ್ಯ ಮಾತ್ಸರ್ಯಾದಿಗಳಿಂದ ರಹಿತನಾಗಿರ ಬೇಕು. ಆಗು ಹೋಗುವಿಕೆಗಳಲ್ಲಿ ಸಮಚಿತ್ತನಾಗಿರಬೇಕು. ಶರೀರ ಯಾತ್ರೆಗೆ (ನಿಲ್ಲುವಿಕೆಗೆ) ಸಾಕಷ್ಟು ಮಾತ್ರ ಕರ್ಮಗಳನ್ನು ಮಾಡಬೇಕು.

" ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋವಿಮತ್ಸರಃ |
ಸಮಃ ಸಿದ್ಧಾವಸಿದ್ಧೌಚ ಕೃತ್ವಾಪಿನನಿಬಧ್ಯತೇ "||
—ಗೀ| ಅ. 4. ಶ್ಲೋ. 22.

ರಾತ್ರಿ ಹಗಲು ಆತ್ಮ ಚಿಂತನೆಯಲ್ಲಿ ರತಸದನಾಗಿರಬೇಕು. ಆತ್ಮ ಪರಾಯಣ ನಾಗಿರಬೇಕು.

**ಸಾರಾರ್ಥ :** ಸರ್ವಸಂಗವನ್ನು ಪರಿತ್ಯಜಿಸಿದ ಸನ್ಯಾಸಿಯು ಸದಾ ಸರ್ವಕಾಲದಲ್ಲೂ ಆಧ್ಯಾತ್ಮದಲ್ಲೇ ಕಾಲ ಕಳೆಯುತ್ತಿರಬೇಕು. ತತ್ಕಥನಂ, ತಧ್ಯಾನಂ, ತತ್‌ಚಿಂತನಂ, ತನ್ಮಥನಂ, ಅನ್ನುವ ಉಪನಿಷದ್ ವಾಕ್ಯದಂತೆ ನಿತ್ಯ ನಿರ್ವಿಕಲ್ಪ ಸಮಾಧಿಯಲ್ಲಿರಬೇಕು.

**ಶ್ಲೋಕ ||** ನಾಸನ್ನಸನ್ನಸದಸನ್ನಮಹನ್ನಚಾಣು
ನಸ್ತ್ರೀಪುಮಾನ್ ನಚನಪುಂಸಕ ಮೇಕಬೀಜಂ
ಯೈರ್ಬ್ರಹ್ಮ ತತ್ಸಮನುಪಾಸಿತ ಮೇಕಚಿತ್ತಾ
ಧನ್ಯಾವಿರೇಜುರಿತರೇಭವಪಾಶಬದ್ಧಾಃ || ೬ ||

**ಭಾವಾರ್ಥ :** ಆ ಚೈತನ್ಯವಸ್ತು ಅಸತ್ತು ಅಲ್ಲ, ಸತ್ತು ಅಲ್ಲ. ಸತ್ ಅಸತ್ತು ಅಲ್ಲ, ಮಹತ್ತು ಅಲ್ಲ, ಅಣುವು ಅಲ್ಲ, ಸ್ತ್ರೀಯೂ ಅಲ್ಲ, ಪುರುಷನೂ ಅಲ್ಲ, ನಪುಂಸಕನೂ ಅಲ್ಲ ಎಲ್ಲಕ್ಕೂ ಕಾರಣವಾಗಿದ್ದಾನೆ. ಪೂರ್ವೋಕ್ತ ವೆಲ್ಲವೂ ಒಂದಾದ ವಸ್ತುವಿನಲ್ಲಿ ಕಲ್ಪಿತವಾಗಿರುತ್ತೆ. ಇಂತಹ ಸರ್ವಕ್ಕೂ ವಿಲಕ್ಷಣವಾದ ಬ್ರಹ್ಮನನ್ನು ತದೇಕ ಚಿತ್ತದಿಂದ ಚಿಂತಿಸಬೇಕು, (ಉಪಾಸಿಸ ಬೇಕು) ಇವರೇ ಧನ್ಯರು, ಸುಶೋಭಿತರು. ಇತರರು ಭವಪಾಶಬದ್ಧರೆಂದು ತಿಳಿಯಬೇಕು.

**ವಿಶೇಷಾರ್ಥ :** ಆತ್ಮ ಕಾರ್ಯರೂಪನೂ ಅಲ್ಲ, ಕಾರಣರೂಪನೂ ಅಲ್ಲ. ಅದು ಇರುವುದೂ ಅಲ್ಲ, ಇಲ್ಲದ್ದೂ ಅಲ್ಲ. " ಸತ್ತನ್ನಾಸದುಚ್ಯತೇ "
—ಗೀ| ಅ. 13 ಶ್ಲೋ. 12.

" ನಾಸದಾಸೀತ್ ನೋಸದಾಸೀತ್ ತದಾನಿಂತವು ಆಸೀತ್ |
ಗಂಧರ್ವನಗರವತ್ ಮೃಗತೃಷ್ಣವತ್ ಮಿಥ್ಯಾಮಾಯಾ
ಮಾತ್ರಮಿದಂದ್ವೈತಂ ಅದ್ವೈತಂ ಪರಮಾರ್ಥತಃ || —ನಿ. ಉ.

ಆತ್ಮನಿಗೆ ಸ್ತ್ರೀ, ಪುರುಷ, ನಪುಂಸಕಾದಿ ಯಾವ ಅವಯುವಗಳ ಚಿಹ್ನೆಗಳೂ ಇಲ್ಲ. ಆದಿ, ಮಧ್ಯಾವಸಾನಗಳೂ ಇಲ್ಲ. ರೂಪು, ನಾಮಾದಿಗಳೂ ಇಲ್ಲ. ಹುಟ್ಟು ಸಾವುಗಳೂ ಇಲ್ಲ. ವರ್ಣಾಶ್ರಮುಗಳೂ ಇಲ್ಲ. ಪುಣ್ಯಪಾಪಾದಿಗಳೂ ಇಲ್ಲ. ಅಕಲ್ಪಿತವಾದ, ಸಹಜಸಿದ್ಧವಾದ ಆ ವಸ್ತುವಿನಲ್ಲಿ ಪೂರ್ವೋಕ್ತವಾದವುಗಳೆಲ್ಲ ಕಲ್ಪಿತವೆಂದರಿಯಬೇಕು.

" ಯಸ್ಯಾಂತೆರ್ನಾದಿಮಧ್ಯಂ ನಹಿಕರಚರಣಂ ನಾಮಗೋತ್ರಂ ನರೂಪಂ |
ನೋಜಾತಂ ನೈವ ವರ್ಣೋ ಭವತಿ ಪುರುಷಂ ನೋನಪುಂಸಂ |
ನಚಸ್ತ್ರೀಕಾರಂ ನೈವಾಕಾರಂ ನಹಿಜರಾಮರಣೇ ನಾಸ್ತಿ ಪುಣ್ಯಂ ನಪಾಪಂ |
ನೋತತ್ತ್ವಂ ತತ್ತ್ವಮೇಕಂ ಸಹಜಸಮರಸಂ ಸದ್ಗುರುಂತಂ ನಮಾಮಿ ||
—ಶು. ಉ.

ಆದ ಕಾರಣ ಯಾವುದು ಸತ್ಯವೋ ಅದನ್ನು ಗುರುಮುಖದಿಂದರಿತು ಚಿಂತಿಸಬೇಕು ಅದನ್ನರಿಯದವರು ಹುಟ್ಟು ಸಾವಿಗೆ ವಶರಾಗುತ್ತಾರೆ.

**ಸಾರಾರ್ಥ :** ಆತ್ಮ ಉಪಾಧಿಯಿಂದ ನಾನಾ ನಾಮರೂಪಗಳಲ್ಲಿ ಕಂಡು ಬಂದರೂ ಅದು ಸರಿಯಲ್ಲ. ನಿರುಪಾಧಿಕನಾದ ಆತ್ಮನಿಗೆ ಯಾವ

ಚಿಹ್ನೆಗಳೂ ಇಲ್ಲ; ಅದನ್ನು ಯಾರೂ ನೋಡುವ ಹಾಗೂ ಇಲ್ಲ, ಕೇಳುವ ಹಾಗೂ ಇಲ್ಲ, ಚಿಂತಿಸುವ ಹಾಗೂ ಇಲ್ಲ, ಎರಡಕ್ಕೆ ಅವಕಾಶವೇ ಇಲ್ಲ.

**ಶ್ಲೋಕ ||** ಅಜ್ಞಾನ ಪಂಕಪರಿಮಗ್ನಮಪೇತಸಾರಂ |
ದುಃಖಾಲಯಂ ಮರಣ ಜನಜ್ಮರಾವಸಕ್ತಂ |
ಸಂಸಾರ ಬಂಧನಂ ಅನಿತ್ಯಮವೇಕ್ಷಧನ್ಯಾ |
ಜ್ಞಾನಾಸಿನಾ ತದವಶೀರ್ಯ ವಿನಿಶ್ಚಯಂತಿ || ೭ ||

**ಭಾವಾರ್ಥ:** ಅವಿವೇಕಿಗಳು ಅಜ್ಞಾನವೆಂಬ ಬಡಿಯಲ್ಲಿ ಮಗ್ನರಾಗಿರುವರು, ದುಃಖಾಲಯವೆಂಬ ಸಂಸಾರದಲ್ಲಿ ಸಿಕ್ಕಿರುವರು. ಹುಟ್ಟು, ಸಾವು, ಮುಪ್ಪು ಮರವೆಗಳೆಂಬ ಸಂಸಾರದಲ್ಲಿ ಆಸಕ್ತರಾಗಿರುವರು. ಅನಿತ್ಯರೂಪ ಸಂಸಾರವನ್ನೇ ನಿತ್ಯವೆಂದು ತಿಳಿದಿರುವರು. ಜನ್ಮ ಮರಣಗಳಲ್ಲಿ ತೊಳಲುತ್ತಾ ಇರುವರು. ಜ್ಞಾನಿಗಳು ಸಂಸಾರದ ಸ್ಥಿತಿಗತಿಗಳನ್ನು ತಿಳಿಯುವರು. ಅದಕ್ಕೆ ಕಾರಣವಾದ ಅಜ್ಞಾನವನ್ನು ಜ್ಞಾನವೆಂಬ ಖಡ್ಗದಿಂದ ಕಡಿದು ತುಂಡು ಮಾಡುವರು. ತತ್ವದ ನಿಶ್ಚಯ ಹೊಂದುವರು. ಜ್ಞಾನದ ವಿನಃ ಅಜ್ಞಾನದ ನಾಶವಾಗದೆಂದು ನಿಶ್ಚಯ ಮಾಡಿಕೊಂಡಿರುವವರೇ ಧನ್ಯರು.

**ವಿಶೇಷಾರ್ಥ :** ಅಜ್ಞಾನದಿಂದ ಜಗತ್ತು ತೋರುತ್ತೆ. ಹೇಗೆಂದರೆ "ಮರುತೇವಾಂಬುರೂಪೇಣ" ಮರುಭೂಮಿಯೋ ಜಲವಾಗಿ ಕಂಡಂತೆ, "ರಜ್ಜುರೇವಾಹಿರೂಪೇಣ" ಹಗ್ಗವೇ ಸರ್ಪದಾಕೃತಿಯಲ್ಲಿ ಕಂಡು ಬಂದಂತೆ "ಶುಕ್ತಿಕಾರಜತಂಯಥಾ" ಶುಕ್ತಿಯೇ ಬೆಳ್ಳಿಯಾಕಾರದಂತೆ ಕಂಡು ಬಂದಂತೆ ಬ್ರಹ್ಮನಲ್ಲಿ ಜಗತ್ತು ಕಂಡು ಬರುತ್ತೆ. ಈ ಅಜ್ಞಾನವು ಕತ್ತಲೆಯಂತೆ ಇರುತ್ತದೆ, ಮಹಾ ಪಾಶದಂತೆ ಇರುತ್ತದೆ, ಕದಡಿದ ಕೆಸರಿನಂತೆ ಇರುತ್ತದೆ. ಈ ಅಜ್ಞಾನವನ್ನು ಸಮ್ಯಕ್ ಜ್ಞಾನದಿಂದಲೇ ಹೋಗಲಾಡಿಸಬೇಕು.

" ಮಿಥ್ಯಾಜ್ಞಾನಸ್ಯ ವಿಚ್ಛಿತ್ತಿ ಸಮ್ಯಜ್ಞಾನೇನ ಸಿಧ್ಯತಿ "

—ಮಹಾವಾಕ್ಯದರ್ಪಣ

" ಜ್ಞಾನೇನತುತದಜ್ಞಾನಂ ಯೇಷಾಂ ನಾಶಿತಮಾತ್ಮನಃ "

—ಗೀ| ಅ. 5. ಶ್ಲೋ. 16.

" ತಸ್ಮಾದಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ |
ಛಿತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ "

—ಗೀ| ಅ. 4. ಶ್ಲೋ. 42.

**ಸಾರಾರ್ಥ**. ಮಿಥ್ಯಾ ಅಜ್ಞಾನದಿಂದ ಸಂಸಾರ ಪ್ರಾಪ್ತಿಯಾಗಿರುತ್ತೆ. ಅದರ ನಿವೃತ್ತಿ ಸಮ್ಯಕ್ ಜ್ಞಾನದಿಂದಲೇ ಹೋಗಬೇಕೇ ವಿನಃ, ಕೋಟಿ ಕರ್ಮ ಉಪಾಸನ ವಾರ ವ್ರತಾದಿಗಳಿಂದ ಹೋಗುವುದಿಲ್ಲ.

**ಶ್ಲೋಕ** || ಶಾಂತೈರನನ್ಯಮತಿಭಿರ್ಮಧುರ ಸ್ವಭಾವೈ |
ರೇಕತ್ವನಿಶ್ಚಿತಮನೋಭಿರಪೇತಮೋಹೈಃ |
ಸಾಕಂ ವನೇಷು ವಿದಿತಾತ್ಮ ಪದಸ್ವರೂಪಂ |
ಶಾಸ್ತ್ರೇಷು ಸಮ್ಯಗನಿಷಂ ವಿಮೃಶನ್ತಿ ಧನ್ಯಾಃ || ೮ ||

**ಭಾವಾರ್ಥ** : ಜನನ ಮರಣಕ್ಕೆ ಕಾರಣವಾದ ಮೋಹವನು ಬಿಟ್ಟಿರಬೇಕು. ದೇಹೇಂದ್ರಿಯಂಗಳ ಸಂಗವನ್ನು ಬಿಡಬೇಕು. ಶಾಂತ ರಾಗಿಯೂ, ಅನನ್ಯಮತಿಯುಳ್ಳವರಾಗಿಯೂ ಮಧುರಸ್ವಭಾವದಿಂದಲೂ, ಸರಳತೆಯಿಂದಲೂ ಕೂಡಿದ ಚಿತ್ತವುಳ್ಳವರಾಗಿರಬೇಕು. ಇಂತಹವರ ಸಂಗಡ ವನದಲ್ಲಿ (ಏಕಾಂತದಲ್ಲಿ) ಶಾಸ್ತ್ರಾನುಸಾರ ಆತ್ಮ ಚಿಂತನ ಮಾಡಬೇಕು. ಹೀಗೆ ಆತ್ಮಾನಾತ್ಮತತ್ವವನ್ನು ವಿಮರ್ಶಿಸಿ ಆತ್ಮಾನು ಸಂಧಾನದಲ್ಲಿ ಸ್ಥಿರಚಿತ್ತ ವುಳ್ಳವರಾಗಿರಬೇಕು. ಇವರೇ ಧನ್ಯರು.

**ವಿಶೇಷಾರ್ಥ** : ಮೋಹವೇ ಸಂಸಾರಕ್ಕೆ ಕಾರಣವಾಗಿರುತ್ತದೆ. ಆದ ಕಾರಣ ಮೋಹಾಂಧಕಾರದಿಂದ ಹೊರ ಬರಬೇಕು. ಪರಮಾತ್ಮನಲ್ಲಿ

ತೋರುವ ಜಗತ್ತು ಮಾಯಾ ಮಾತ್ರವಾಗಿರುವುದು. ಈ ಜಗದ್ವಸ್ತುಗಳನ್ನೆ ಪರಮಾತ್ಮನೆಂದು ಅಜ್ಞರು ಭಾವಿಸುವರು. ಆತ್ಮನ ನಿಜ ತತ್ತ್ವವನ್ನು ತಿಳಿಯದೇಹೋಗುವರು.

" ಮೋಹಿತಂ ನಾಭಿಜಾನಾತಿ " —ಗೀ| ಅ 7. ಶ್ಲೋ. 13.

ಆತ್ಮನ ನಿಜ ತತ್ತ್ವವನ್ನು ಶಾಂತ ಮನಸ್ಸಿನಿಂದ ವಿಮರ್ಶಿಸಬೇಕು. ಅನನ್ಯಮತಿಯಿಂದ ಅಂದರೆ ಆತ್ಮವೇ ನಾನೆಂಬ ಬುದ್ಧಿಯಿಂದ ತಿಳಿಯ ಬೇಕು. ಸರಳತೆಯಿಂದಲೂ, ಸೂಕ್ಷ್ಮ ಬುದ್ಧಿಯಿಂದಲೂ ವಿಮರ್ಶಿಸ ಬೇಕು-(ಸಂಗರಹಿತ ಶುದ್ಧ ಬುದ್ಧಿ) ವಶೀಕೃತ ಮನಸ್ಸುಳ್ಳವರಾಗಿರಬೇಕು. ಭೋಗೇಚ್ಛಾರಹಿತರಾಗಿರಬೇಕು. ಶಬ್ದಾದಿ ವಿಷಯುಗಳಿಂದ ದೂರವಾಗಿ ಬೇಕು. ರಾಗದ್ವೇಷಗಳನ್ನು ತೊಲಗಿಸಿಕೊಂಡಿರಬೇಕು. ಏಕಾಂತ ಸ್ಥ ದಲ್ಲಿರಬೇಕು. ಈ ಪೂರ್ವೋಕ್ತ ಸಾಧನೆಗಳಿಂದ ಒಡಗೂಡಿದವರಿಗೆ ತತ್ತ್ವ ಸಾಕ್ಷಾತ್ಕಾರ ಜಾಗ್ರತೆಯಲ್ಲೇ ಆಗುತ್ತದೆ.

**ಸಾರಾರ್ಥ:** ಮುಮುಕ್ಷುಗಳಾಗಲೀ, ಮುಕ್ತರಾಗಲಿ ಮೋಹದಿಂ ದೂರವಾಗಿರಬೇಕು. ಮೋಹವು ಜನ್ಮ ಮರಣಕ್ಕೆ ಕಾರಣವಾಗಿರುವುದಲ್ಲ ತತ್ತ್ವ ಜ್ಞಾನಕ್ಕೂ ಅಡ್ಡಿಯಾಗಿರುತ್ತದೆ. ಮೋಹದಿಂದಲೇ ವಾಮದೇ ಜಡಭರತನಿಗೆ ಜನ್ಮಾದಿಗಳು ಪ್ರಾಪ್ತವಾಗಿರುತ್ತದೆ. ಆದ ಕಾರಣ ಮುಕ್ತರು ಧ್ಯಾನಾಸಕ್ತರೂ ಕೂಡ ಮೋಹ ವರ್ಜಿತರಾಗಿರಬೇಕು.

ಶ್ರೀ ಶಂಕರಾಚಾರ್ಯ ಕೃತ ಧನ್ಯಾಷ್ಟಕಕ್ಕೆ ಅದ್ವೈತ ಶಿಖಾಮಣಿ ಬ್ರಂ.ಶ್ರೀ ಶಿವಾನಂದ ಸ್ವಾಮೀಜಿಯವರು ಬರೆದ ಭಾವಾರ್ಥ ಮುಕ್ತಾಯವಾಗಿದೆ.



# ಫಲಶ್ರುತಿ

ಶ್ಲೋಕ || ಅಹಿಮಿವಜನಸಂಯೋಗಂ ಸರ್ವದಾ ವರ್ಜಯೇಧ್ವಃ |
ಕುಣಪಮಿವ ಸುರನಾರೀಂ ತ್ಯಕ್ತುಕಾಮೋವಿರಾಗಿ |
ವಿಷಮಿವ ವಿಷಯಾನ್ಯೋಮನ್ಯಮನೋದುರಂತಾನ್ |
ಜಯತಿ ಪರಮಹಂಸೋ ಮುಕ್ತಿಭಾವಮ್ ಸಮೇತಿ||೯||

ಭಾವಾರ್ಥ : ಸರ್ಪಕ್ಕೆ ಸಮಾನವಾಗಿ ತಿಳಿದು ಜನಸಮೂಹವನ್ನು ಯಾರು ತ್ಯಜಿಸುವನೋ, ಶವಕ್ಕೆ ಸಮಾನವೆಂದು ತಿಳಿದು ಸುರನಾರಿಯರನ್ನು ಉಪೇಕ್ಷಿಸುವನೋ, ವಿಷಕ್ಕೆ ಸಮಾನ ವಿಷಯಂಗಳನ್ನು ತಿಳಿದು ತ್ಯಜಿಸುವನೋ ಅಂತಹ ಪರಮಹಂಸನಿಗೆ ಜಯವಾಗಲಿ; ಅವನೇ ಮುಕ್ತಿ ಹೊಂದತಕ್ಕವನು.

ಶ್ಲೋಕ ||

ಸಂಪೂರ್ಣ ಜಗಡೇವನಂದನವನಂಸರ್ವೇಽಪಿ ಕಲ್ಪದ್ರುಮ |
ಗಂಗಾವಾರಿ ಸಮಸ್ತವಾರಿನಿವಾಹಾಃ ಪುಣ್ಯಾಃ ಸಮಸ್ತ ಕ್ರಿಯಾಃ |
ವಾಚಃ ಪ್ರಾಕೃತ ಸಂಸ್ಕೃತಾಃ ಶ್ರುತಿಶಿರೋ ವಾರಣಾಸಿ ಮೇದಿನೀ |
ಸರ್ವಾವಸ್ಥಿತಿರಸ್ಯವಸ್ತು ವಿಷಯಾ ದೃಷ್ಟೇ ಪರಬ್ರಹ್ಮಣೇ || ೧೦ ||

ಭಾವಾರ್ಥ: ಬ್ರಹ್ಮ ಸಾಕ್ಷಾತ್ಕಾರವಾದವನಿಗೆ ಸಂಸಾರವೆಲ್ಲವೂ ನಂದನವನವಾಗಿರುತ್ತೆ; ಎಲ್ಲಾ ವೃಕ್ಷಗಳೂ ಕಲ್ಪವೃಕ್ಷವಾಗಿರುತ್ತೆ; ಎಲ್ಲಾ ಜಲಾಶಯವೂ ಗಂಗಾಜಲವಾಗುತ್ತೆ; ಎಲ್ಲಾ ಕ್ರಿಯೆಗಳೂ ಪುಣ್ಯ ರೂಪವಾಗುತ್ತೆ; ಅವನ ವಾಣಿ ಪ್ರಾಕೃತವಾಗಲಿ, ಸಂಸ್ಕೃತವಾಗಲಿ, ವೇದಗಳ ಸಾರವಾಗುತ್ತೆ; ಭೂಮಂಡಲವೆಲ್ಲ ಕಾಶೀ ಕ್ಷೇತ್ರ (ಮುಕ್ತಿ ಕ್ಷೇತ್ರ) ವಾಗುತ್ತೆ; ಅವನ ವ್ಯವಹಾರವೆಲ್ಲ ಪರಮಾರ್ಥವಾಗುತ್ತೆ.

---

|| ಶ್ರೀ ||

# ಶುಕಾಷ್ಟಕ

ಭೇದಾ ಭೇದೌ ಸಪದಿಗಳಿತೌ ಪುಣ್ಯ ಪಾಪೇ ವಿಶೀರ್ಣೇ |
ಮಾಯಾ ಮೋಹಾಕ್ಷಯಮುದಿಗತೌ ನಷ್ಟ ಸಂದೇಹ ವೃತ್ತಿಃ |
ಶಬ್ದಾತೀತಂ ತ್ರಿಗುಣರಹಿತಂ ಪ್ರಾಪ್ಯತತ್ವಾ ಬೋಧಂ |
ನಿಸ್ತ್ರೈಗುಣ್ಯೇ ಪಥಿವಿಚರತಾಂ ಕೋವಿಧಿ ಕೋನಿಷೇಧಃ || ೧ ||

ಭಾವಾರ್ಥ : ಭೇದಾಭೇದಗಳೆರಡು ಕರಗಿ ಹೋಗಿರುತ್ತೆ. ಪುಣ್ಯ ಪಾಪಗಳು ಜೀರ್ಣವಾಗಿರುತ್ತೆ ಮಾಯಾಮೋಹಗಳು ಕ್ಷಯಿಸಿ ಹೋಗಿರುತ್ತೆ. ಸಂಶಯುವು ನಷ್ಟವಾಗಿದೆ. ಶಬ್ದಕ್ಕೆ (ವೇದ) ಅತೀತವಾಗಿದ್ದಾನೆ. ಮೂರು ಗುಣಗಳು ಇಲ್ಲದ ಸ್ಥಿತಿಯುಳ್ಳವನಾಗಿದ್ದಾನೆ. ಪೂರ್ಣ ತತ್ತ್ವವನ್ನು ತಿಳಿದವನಾಗಿರುತ್ತಾನೆ. ಗುಣ ರಹಿತ ಬೀದಿಯಲ್ಲಿ ಓಡಾಡುತ್ತಿರುತ್ತಾನೆ. ಪೂರ್ವೋಕ್ತ ಲಕ್ಷಣಗಳಿಂದೊಡಗೂಡಿದ ಜೀವನ್ಮುಕ್ತರಿಗೆ ವಿಧಿ ನಿಷೇಧ ಗಳೆರಡು ಎಲ್ಲಿರುತ್ತೆ ?

ಯಸ್ಮಾತ್ವತ್ಮಾನಂ ಸಕಲವಪುಷ್ವಮೇಕಂ ಅಂತರ್ಬಹಿಸ್ಥಂ |
ದೃಷ್ಟ್ವಾ ಪೂರ್ಣಂ ಖಂಮಿವ ಸತತಂ ಸರ್ವ ಭಾಂಡಸ್ತಮೇಕಂ |
ನಾನ್ಯತ್ಕಾರ್ಯಂ ಕಿಮುಪಿಚ ತಥಾ ಕಾರಣಾದ್ಭಿನ್ನ ರೂಪಂ |
ನಿಸ್ತ್ರೈಗುಣ್ಯೇ ಪಥಿವಿಚರತಾಂ ಕೋವಿಧಿ ಕೋನಿಷೇಧಃ || ೨ ||

**ಭಾವಾರ್ಥ :** ಆಕಾಶದಂತೆ ಆತ್ಮನು ಎಲ್ಲಾ ಶರೀರಗಳ ಒಳ ಹೊರಗೆಲ್ಲಾ ಒಬ್ಬನೇ ಇರುವನು. ಹೇಗೆಂದರೆ, ಎಲ್ಲಾ ಮಡಕೆಗಳ ಒಳ ಹೊರಗೆಲ್ಲಾ ಮಣ್ಣು ಒಂದೇ ಇರುವಂತೆ ಆತ್ಮನೊಬ್ಬನೇ ಇರುವನು. ಕಾರಣ ರೂಪ ಮಣ್ಣಿಗೆ ಬಿಟ್ಟು ಮಡಕೆಗಳು ಇರುವುದಿಲ್ಲ; ಅದರಂತೆ ಆತ್ಮನಿಗೆ ಬಿಟ್ಟು ಅನ್ಯವಸ್ತುವಾದ ಪದಾರ್ಥಗಳು ಬೇರೆ ಇರುವುದಿಲ್ಲ. ಗುಣರಹಿತವಾದ ಬೀದಿಯಲ್ಲಿ ಓಡಾಡುವವರಿಗೆ ವಿಧಿ ನಿಷೇಧಗಳೆರಡೂ ಇಲ್ಲ.

**ಯದ್ವನ್ನದ್ಯೋಂಬುಧಿ ಮಧಿಗತಸಾಗರತ್ವಂ ಪ್ರಪನ್ನಾಃ |**
**ತದ್ವಜ್ಜೀವಾ ಸಮರಸಗತಾಃ ಚಿತ್ಸ್ವರೂಪಂ ಪ್ರಪನ್ನಾಃ |**
**ವಾಚಾತೀತೇ ಸಮರಸಘನೇ ಸಚ್ಚಿದಾನಂದರೂಪೇ |**
**ನಿಸ್ತ್ರೈಗುಣ್ಯೇ ವಿಥಿವಿಚರತಾಂ ಕೋವಿಧಿ ಕೋನಿಷೇಧಃ || ೩ ||**

**ಭಾವಾರ್ಥ :** ಹೇಗೆ ನದಿಗಳು ಸಮುದ್ರವನ್ನು ಸೇರಿ ಸಮುದ್ರವೇ ಆಗಿ ಹೋಗುತ್ತದೋ, ಅದರಂತೆಯೇ ಎಲ್ಲಾ ಜೀವರೂ ಚೈತನ್ಯರೂಪ ಪರಮಾತ್ಮನೊಳು ಸೇರಿ ಚಿತ್ಸ್ವರೂಪವೇ ಆಗಿಹೋಗುವರು. ಆ ಚೈತನ್ಯವು ಯಾವುದೆಂದರೆ, ವಾಕ್ಕಿಗೂ, ಮನಸ್ಸಿಗೂ ಅಗೋಚರವಾದದ್ದು, ಸಚ್ಚಿದಾನಂದರೂಪವಾದದ್ದು ಎಂದು ತಿಳಿಯಬೇಕು ಗುಣ ರಹಿತ ಬೀದಿಯಲ್ಲಿ ಓಡಾಡುವವರಿಗೆ ವಿಧಿ ನಿಷೇಧಗಳೆರಡೂ ಇಲ್ಲವೆಂದು ತಿಳಿಯಬೇಕು.

**ಹೇಮ ಕಾರ್ಯಂ ಹುತಾವಹಗತಂ ಹೇಮತಾಮೇತಿ ತದ್ವತ್|**
**ಕ್ಷೀರಂಕ್ಷೀರೆ ಸಮರಸಗತಂ ತೋಯಮೇವಾಂಬುಮಧ್ಯೆ |**
**ಏವಂ ಸರ್ವಂ ಸಮರಸಗತಂ ತ್ವಂಪದಂ ತತ್ಪದಾರ್ಥೇ |**
**ನಿಸ್ತ್ರೈಗುಣ್ಯೇ ವಿಥಿವಿಚರತಾಂ ಕೋವಿಧಿ ಕೋನಿಷೇಧಃ || ೪ ||**

**ಭಾವಾರ್ಥ :** ಒಡವೆಗಳನ್ನು ಕಾಯಿಸಿದನಂತರ ಅವು (ಒಡವೆಗಳು) ಚಿನ್ನವೇ ಆಗುತ್ತದೆ ಮತ್ತು ಹಾಲು ಹಾಲಲ್ಲಿ ಸೇರಿದರೆ ಹಾಲೇ ಆಗುತ್ತದೆ. ನೀರು ನದಿಯಲ್ಲಿ ಸೇರಿ ನದಿಯೇ ಆಗುತ್ತದೆ. ಹಾಗೆಯೇ ತ್ವಂ

ಪದವು ತತ್‌ಪದದೊಡನೆ ಸೇರಿದರೆ ತತ್ ಸ್ವರೂಪವೇ ಆಗುತ್ತದೆ. (ತ್ವಂ ಅಂದರೆ ನೀನು ಜೀವ) (ತತ್ ಎಂದರೆ ಅದು ಬ್ರಹ್ಮ) ಅಂದರೆ ಜೀವನೇ ಪರಬ್ರಹ್ಮಸ್ವರೂಪನಾಗಿರುವನು. ಗುಣರಹಿತ ಬೀದಿಯಲ್ಲಿ ಓಡಾಡತಕ್ಕ ವರಿಗೆ ವಿಧಿ ನಿಷೇಧಗಳೆರಡೂ ಇರುವುದಿಲ್ಲ.

**ಕಶ್ಚಾತ್ರಾಹಂ ಕಿಮಪಿಚಭಗವಾನ್ ಕೋಽಯಂ ಅತ್ರ ಪ್ರಪಂಚಃ |**
**ಸ್ವಾಂತರ್ವೇದ್ಯೈಗಗನ ಸದೃಶೇ ಪೂರ್ಣತತ್ವಪ್ರಕಾಶೇ |**
**ಆನಂದಾಖ್ಯೇ ಸಮರಸಘನೇ ಬಾಹ್ಯಮಂತರ್ವಿಲೀನೇ |**
**ನಿಸ್ತ್ರೈಗುಣ್ಯೇ ವಿಥಿವಿಚರತಾಂ ಕೋವಿಧಿ ಕೋನಿಷೇಧಃ ॥ ೫ ॥**

ಭಾವಾರ್ಥ : ಇಲ್ಲಿ ನಾನು ಯಾರು ? ಭಗವಂತನಾದರೂ ಯಾರು ? ಈ ಪ್ರಪಂಚವಾದರೂ ಇಲ್ಲಿ ಯಾವುದು ? ಗಗನ ಸದೃಶವಾದ, ಪೂರ್ಣ ತತ್ತ್ವಪ್ರಕಾಶರೂಪ ಆನಂದರೂಪಿ ಪರಮಾತ್ಮನಲ್ಲಿ ಒಂದಾದ ಮೇಲೆ ಪೂರ್ವೋಕ್ತ ಪ್ರಶ್ನೆಗಳೇ ಬರುವುದಿಲ್ಲ. ಗುಣರಹಿತ ಬೀದಿಯಲ್ಲಿ ಓಡಾಡುವವರಿಗೆ ವಿಧಿ ನಿಷೇಧಗಳೆರಡೂ ಇರುವುದಿಲ್ಲ.

**ದೃಷ್ಟ್ವಾಸರ್ವಂ ಪರಮಮೃತಂ ಸ್ವಪ್ರಕಾಶ ಸ್ವರೂಪಂ |**
**ಬುದ್ಧ್ವಾತ್ಮಾನಂ ವಿಮಲಮಚಲಂ ಸಚ್ಚಿದಾನಂದರೂಪಂ ॥**
**ಬ್ರಹ್ಮಾಧಾರಂ ಸಕಲಜಗತಾಂ ಸಾಕ್ಷಿಣಂ ನಿರ್ವಿಶೇಷಂ |**
**ನಿಸ್ತ್ರೈಗುಣ್ಯೇ ವಿಥಿವಿಚರತಾಂ ಕೋವಿಧಿ ಕೋನಿಷೇಧಃ ॥ ೬ ॥**

ಭಾವಾರ್ಥ : ಆತ್ಮನು ಪರಮನು; ಅಮೃತ ಸ್ವರೂಪನು. ಸ್ವಯಂ ಪ್ರಕಾಶ ಸ್ವರೂಪನು. ಶುದ್ಧಸ್ವರೂಪನು; ಅಚಲ ಸ್ವರೂಪನು. ಸಚ್ಚಿದಾನಂದ ರೂಪನು. ಸರ್ವಾಧಾರನು. ಜಗತ್ಸಾಕ್ಷಿಸ್ವರೂಪನು. ವಿಶೇಷವಿಲ್ಲದವನು. ಪೂರ್ವೋಕ್ತ ಲಕ್ಷಣಯುಕ್ತ ಆತ್ಮನನ್ನು ಅರಿತವರಿಗೆ ವಿಧಿ ನಿಷೇಧಗಳೆರಡೂ ಇಲ್ಲ.

ಕಾರ್ಯಾಕಾರ್ಯಂಕಿಮಪಿಚರತೋ ನೈವಕರ್ತೃತ್ವಮಸ್ತಿ |
ಜೀವನ್ಮುಕ್ತಿಸ್ಥಿತಿರಿಹಗತಾ ದಗ್ಧವಸ್ತ್ರಾವಭಾಸಾ ||
ಏವಂದೇಹೀ ಪ್ರಚಲಿತತಯಾದೃಶ್ಯಮಾನಾ ಸಮುಕ್ತೋ |
ನಿಸ್ತ್ರೈಗುಣ್ಯೇ ವಿಥಿವಿಚರತಾಂ ಕೋವಿಧಿ ಕೋನಿಷೇಧಃ || ೭ ||

ಭಾವಾರ್ಥ : ವಿಧಿ ನಿಷೇಧರೂಪ ಕೆಲಸಗಳನ್ನು ಮಾಡಿದರೂ ಅವನಿಗೆ ಕರ್ತೃತ್ವ ಬುದ್ಧಿ ಇರುವುದಿಲ್ಲ. ಎಲ್ಲರ ಕಣ್ಣಿಗೂ ಕರ್ತೃ ಭೋಕ್ತೃವಿನ ಹಾಗೆ ಕಂಡು ಬಂದರೂ ಅವನು ಅಕರ್ತೃ ಅಭೋಕ್ತೃವಾಗಿಯೇ ಇರುತ್ತಾನೆ. ಆ ಜೀವನ್ಮುಕ್ತನು ದಗ್ಧವಸ್ತ್ರದ ಹಾಗೆ ಕಾಣುತ್ತಾನೆ. ಬೆಂಕಿಗೆ ಕೀಟ ಮುತ್ತದ ಹಾಗೆ ಅವನಿಗೆ ಯಾವ ಪುಣ್ಯಪಾಪಗಳಾಗಲಿ ಅಂಟುವುದಿಲ್ಲ. ಗುಣರಹಿತ ಬೀದಿಯಲ್ಲಿ ಓಡಾಡುವವರಿಗೆ ವಿಧಿ ನಿಷೇಧಗಳೆರಡೂ ಇರುವುದಿಲ್ಲ.

ಯಸ್ಮಿನ್ ವಿಶ್ವಂ ಸಕಲಭುವನಂ ಸೈಂಧವಂ ಸಿಂಧು ಮಧ್ಯೆ |
ಪೃಥ್ವ್ಯಂಬ್ವಗ್ನಿಶ್ವಸರ್ಗ ಗಗನಂ ಜೀವಭಾವಕ್ರಮೇಣ ||
ಯದ್ಯತ್ತಲ್ಲೀನಂ ತದಿದಮಖಿಲಂ ಸಚ್ಚಿದಾನಂದರೂಪಂ |
ನಿಸ್ತ್ರೈಗುಣ್ಯೇ ವಿಥಿವಿಚರತಾಂ ಕೋವಿಧಿ ಕೋನಿಷೇಧಃ || ೮ ||

ಭಾವಾರ್ಥ : ನೀರಿನಲ್ಲಿ ಉಪ್ಪು ಕರಗಿದಂತೆ ಎಲ್ಲಾ ಜೀವರೂಪ ಜಗತ್ತು ಕ್ರಮಕ್ರಮೇಣ, (ಕಾರ್ಯಾಕಾರಣ ರೂಪದಿಂದ) ಪಂಚ ಭೂತಗಳು ಒಂದರಲ್ಲಿ ಒಂದು ಲಯವಾಗುತ್ತವೆ. ಕೊನೆಯಲ್ಲಿ ಎಲ್ಲವೂ ಸಚ್ಚಿದಾನಂದ ರೂಪ ಪರಬ್ರಹ್ಮನಲ್ಲಿ ವಿಲೀನವಾಗಿ ಹೋಗುತ್ತದೆ. ಎಲ್ಲವೂ ಒಂದೇ ಪರ ಬ್ರಹ್ಮ ಸ್ವರೂಪವಾಗುತ್ತದೆ. ಗುಣರಹಿತ ಬೀದಿಯಲ್ಲಿ ಓಡಾಡುವವರಿಗೆ ವಿಧಿ ನಿಷೇಧಗಳೆರಡೂ ಇಲ್ಲ.

ಶ್ರೀ ಶಂಕರಾಚಾರ್ಯ ಕೃತ ಶುಕಾಷ್ಟಕಕ್ಕೆ ಅದ್ವೈತ ಶಿಖಾಮಣಿ ಬ್ರಂ. ಶ್ರೀ ಶಿವಾನಂದ ಸ್ವಾಮೀಜಿ ಕೃತ ಭಾವಾರ್ಥ ಮುಕ್ತಾಯವಾಯಿತು.



॥ ಶ್ರೀ ॥

# ತತ್ತ್ವಮಸ್ಯಷ್ಟಕಮ್

ನಾಮರೂಪಾದಯೋ ಯತ್ರ ಕಲ್ಪಿತಾಶ್ಚಿತ್ತ ವಿಭ್ರಮಾತ್ ।
ವ್ಯೋಮ್ನೀವನಗರಂ ಯತ್ತದ್ಬ್ರಹ್ಮ ತತ್ತ್ವಮಸಿಧ್ರುವಮ್ ॥ ೧ ॥

ಭಾವಾರ್ಥ : ಗಂಧರ್ವ ನಗರದಂತೆ ಚಿತ್ತದ ಭ್ರಾಂತಿಯಿಂದ ಯಾವುದರಲ್ಲಿ ನಾಮರೂಪಾತ್ಮಕ ಜಗತ್ತು ಕಲ್ಪಿತವಾಗಿರುತ್ತೋ ಅದು ಬ್ರಹ್ಮ. ಆ ಬ್ರಹ್ಮವೇ ನಿಜವಾಗಿ ನೀನಾಗಿರುವಿ.

ದ್ರಷ್ಟೃದರ್ಶನ ದೃಶ್ಯಾನಾಮಭಾವೋ ಯತ್ರ ದೃಶ್ಯತೇ ।
ಯದೇವ ಕೇವಲಂ ಶುದ್ಧಂಬ್ರಹ್ಮ ತತ್ತ್ವಮಸಿಧ್ರುವಮ್ ॥ ೨ ॥

ಭಾವಾರ್ಥ : ದ್ರಷ್ಟೃ, ದರ್ಶನ, ದೃಶ್ಯಗಳೆಂಬ ತ್ರಿಪುಟಿಗಳ ಅಭಾವ ಯಾವುದರಲ್ಲಿ ಕಾಣುತ್ತೋ, ಅದು ಕೇವಲ ಶುದ್ಧ ಬ್ರಹ್ಮವಾಗಿದೆ. ಆ ಬ್ರಹ್ಮವೇ ನಿಜವಾಗಿ ನೀನಾಗಿರುವಿ.

ಅಂತಃ ಪೂರ್ಣಂ ಬಹಿಃ ಪೂರ್ಣಂ ಸ್ವಯಮದ್ವಯಮಕ್ರಿಯಮ್
ಯದನಂತಂ ಪರಂಜ್ಯೋತಿ ಬ್ರಹ್ಮ ತತ್ತ್ವಮಸಿಧ್ರುವಮ್ ॥ ೩ ॥

ಭಾವಾರ್ಥ : ಯಾವುದು ಒಳಗೂ, ಹೊರಗೂ ಪೂರ್ಣವಾಗಿರು ವುದೋ, ತಾನೇ ತಾನಾಗಿರುವುದೋ, ದ್ವೈತವರ್ಜಿತವಾಗಿರುವುದೋ

ಅಕ್ರಿಯಾತ್ಮಕವಾಗಿರುವುದೋ, ಅನಂತವಾಗಿರುವುದೋ, ಪರಂಜ್ಯೋತಿ, ಪರಬ್ರಹ್ಮವಾಗಿರುವುದೋ ಆ ಬ್ರಹ್ಮವೇ ನಿಜವಾಗಿ ನೀನಾಗಿರುವಿ.

**ಯದ್ಗ್ರಾಹ್ಯ ಗ್ರಾಹಕಾದಿನಾಂ ಭಾಸಕಂ ತದ್ವಿಲಕ್ಷಣಮ್ |**
**ಭಾವಮಾತ್ರಂ ಪರಿತಃಪೂರ್ಣಂ ಬ್ರಹ್ಮತತ್ವಮಸಿಧ್ರುವಮ್ ‖ ೪ ‖**

ಭಾವಾರ್ಥ : ಯಾವುದು ಗ್ರಾಹ್ಯ ( ಗ್ರಹಣಯೋಗ್ಯವಾದದ್ದು ) ಗ್ರಾಹಕಾದಿ (ಸೂರ್ಯ ಚಂದ್ರಾದಿ) ಗಳಿಗೆ ಬೆಳಗುತ್ತೋ ಮತ್ತು ಅವುಗಳಿಗೆ ವಿಲಕ್ಷಣವಾಗಿರುವುದೋ, ಭಾವಮಾತ್ರ ಸ್ವರೂಪವಾಗಿರುವುದೋ, ಸುತ್ತಲೂ ಪೂರ್ಣವಾಗಿರುವುದೋ ಅದು ಬ್ರಹ್ಮ. ಆ ಬ್ರಹ್ಮವೇ ನಿಜವಾಗಿ ನೀನಾಗಿರುವಿ.

**ಭಾನುನಾಭಾಸಿತಂರೂಪಂ ಯಥಾಶ್ಚಕ್ಷುಸ್ತಥಾಮನಃ |**
**ಯೇನಭಾತಮಿದಂವೇತ್ತಿ ಬ್ರಹ್ಮ ತತ್ವಮಸಿಧ್ರುವಮ್ | ೫ ‖**

ಭಾವಾರ್ಥ : ಸೂರ್ಯ, ಕಣ್ಣು, ಮನಸ್ಸಿನಿಂದ ಏನೇನು ತಿಳಿಯಲ್ಪಡುವುವೋ ಅವೆಲ್ಲವೂ ಬ್ರಹ್ಮನಿಂದಲೇ ಪ್ರಕಾಶವಾಗಿರುತ್ತೆ. ಅಥವ ಸೂರ್ಯ ಮನಶ್ಚಕ್ಷುಗಳಿಂದ ಬ್ರಹ್ಮವನ್ನು ತಿಳಿಯಲ್ಪಡುವುದಿಲ್ಲ. ಬ್ರಹ್ಮನಿಂದಲೇ ಇವೆಲ್ಲವೂ ತಿಳಿಯಲ್ಪಡುತ್ತೆ. ಯಾವ ಬ್ರಹ್ಮನಿಂದ ಎಲ್ಲವೂ ತಿಳಿಯಲ್ಪಡುತ್ತದೆಯೋ ಆ ಬ್ರಹ್ಮವೇ ನಿಜವಾಗಿಯೂ ನೀನಾಗಿರುವಿ.

**ಸಕೃದ್ವಿಭಾತಂ ಪುರತಸ್ಸರ್ವಸ್ಮಾತ್ಸುವಿಭಾತಿಯತ್ |**
**ಯದ್ಭಾನಮನುಭಾತೀದಂ ಬ್ರಹ್ಮ ತತ್ವಮಸಿಧ್ರುವಮ್ ‖ ೬ ‖**

ಭಾವಾರ್ಥ : ಬ್ರಹ್ಮನ ಪ್ರಕಾಶ ಒಂದರಿಂದಲೇ ಎಲ್ಲವೂ ಪ್ರಕಾಶಮಾನವಾಗುತ್ತೆ ಅಥವ ಚನ್ನಾಗಿ ತಿಳಿಯಲ್ಪಡುತ್ತೆ. ಅವನ ಬೆಳಕನ್ನು ಅನುಸರಿಸಿ ಎಲ್ಲವೂ ಬೆಳಗಲ್ಪಡುತ್ತೆ. ಅದುವೆ ಬ್ರಹ್ಮ. ಆ ಬ್ರಹ್ಮವೇ ನಿಜವಾಗಿಯೂ ನೀನಾಗಿರುವಿ.

**ದರ್ಶನಂ ಶ್ರವಣಂ ಜ್ಞಾನಂ ಯತ್ರನಾನ್ಯಸ್ಯವಿದ್ಯತೇ |**
**ಸೂಕ್ಷ್ಮಮಪ್ಯಪದೇಶ್ಯಂ ಯತ್ ಬ್ರಹ್ಮ ತತ್ವಮಸಿಧ್ರುವಮ್ ॥ ೭ ||**

ಭಾವಾರ್ಥ : ದರ್ಶನ, ಶ್ರವಣ, ಜ್ಞಾನಗಳೆಂಬ ಈ ತ್ರಿಪುಟಿಗಳು ಬ್ರಹ್ಮನಲ್ಲಿ ಕಲ್ಪಿತವಾದ್ದರಿಂದ ಬ್ರಹ್ಮನಿಗನ್ಯವಲ್ಲ. ಆದರೆ, ಅಧಿಕಾರಿಗಳಲ್ಲದವರಿಗೆ ತಿಳಿಯಲು ಸಾಧ್ಯವಿಲ್ಲ. ಬ್ರಹ್ಮನು ಅತಿ ಸೂಕ್ಷ್ಮನಾಗಿದ್ದರೂ ಔಪನಿಷದ್ಗಮ್ಯನಾಗಿರುವನು. ಉತ್ತಮಾಧಿಕಾರಿಗಳಿಂದ ಅರಿಯಲ್ಪಡತಕ್ಕವನಾಗಿರುವನು. ಇಂತಹ ಬ್ರಹ್ಮವೇ ನಿಜವಾಗಿಯೂ ನೀನಾಗಿರುವಿ.

**ನಿಷ್ಕಲಂ ನಿಷ್ಕ್ರಿಯಂ ಶಾಂತಂ ನಿರವದ್ಯಂ ನಿರಂಜನಂ |**
**ಶುದ್ಧವಿಜ್ಞಾನಮಾನಂದಂ ಬ್ರಹ್ಮ ತತ್ವಮಸಿಧ್ರುವಮ್ || ೮ ||**

ಭಾವಾರ್ಥ : ಬ್ರಹ್ಮನು ಕಳಾರಹಿತನು, ಕ್ರಿಯಾರಹಿತನು, ಶಾಂತನು, ಕತ್ತರಿಸಲಾಗದವನು, ಅಜ್ಞಾನರಹಿತನು, ಶುದ್ಧರೂಪನು, ವಿಜ್ಞಾನರೂಪನು, ಆನಂದ ಸ್ವರೂಪನು. ಆ ಪರಬ್ರಹ್ಮ ಸ್ವರೂಪವೇ ನಿಜವಾಗಿಯೂ ನೀನಾಗಿರುವಿ.

ಶ್ರೀ ಶಂಕರಾಚಾರ್ಯ ವಿರಚಿತ ತತ್ವಮಸ್ಯಷ್ಟಕಕ್ಕೆ ಅದ್ವೈತಶಿಖಾಮಣಿ ಬ್ರಂ.ಶ್ರೀ ಶಿವಾನಂದಸ್ವಾಮಿಜಿ ಬರೆದ ಭಾವಾರ್ಥವು ಮುಕ್ತಾಯವಾಯಿತು.



# ಆರತಿ

ಶಿವನು ನೀನಲ್ಲ ಜೀವನು ನೀನಲ್ಲ ಶಿವಜೀವರಿಗಾಶ್ರಯನೆಂದರುಪಿದ
ನಿಜಗುರುದೇವಗೆ ಮಂಗಳಂ ಶುಭ ಮಂಗಳಂ ‖ ‖ ಪ ‖

ಕೀಳು ಮೇಲಿಲ್ಲದ ಸಾವು ನೋವಾಗದ ಗುರುತರನೆ ನೀನೆಂದು ತಿಳುಹಿದ
ನಿಜಗುರುದೇವಗೆ ಮಂಗಳಂ ಶುಭ ಮಂಗಳಂ ‖ ‖ ೧ ‖

ಅಜ ಹರಿಹರರು ಅರಿಯದ ಸಿರಿಯ ನಿಜಲೀಲೆಯೊಳು ತೋರಿಸಿದಾಪರಿಯ
ನಿಜಗುರುದೇವಗೆ ಮಂಗಳಂ ಶುಭ ಮಂಗಳಂ ‖ ‖ ೨ ‖

ಆದಿ ಅಂತ್ಯವಿಲ್ಲದ ಅನಾದಿಯೆನಿಸದ ಆ ಪರಿಪೂರ್ಣಾನಂದವೆ ನೀನೆಂದರುಪಿದ
ನಿಜಗುರು ದೇವಗೆ ಮಂಗಳಂ ಶುಭ ಮಂಗಳಂ ‖ ‖ ೩ ‖

ಭಾವಕೆ ಸಿಲುಕದ ಭವ್ಯಚಿದಾತ್ಮನ ಭಾವದೊಳು ಬೆರೆಸಿ ತಾನೇ ತಾನಾದ
ಶಿವಾನಂದಗೆ ಜಯ ಮಂಗಳಂ ಶುಭ ಮಂಗಳಂ ‖ ‖ ೪ ‖

———

‖ ಓಂ ‖

ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೆ
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ

ಓಂ ಶಾಂತಿ ಶಾಂತಿ ಶಾಂತಿಃ



# ಅದ್ವೈತ ಶಿಖಾಮಣಿ
# ಬ್ರಂ|| ಶ್ರೀ|| ಶಿವಾನಂದಸ್ವಾಮಿಜಿಯವರು
## ಬರೆದಿರುವ ಪುಸ್ತಕಗಳ ಪರಿಚಯ

ಆತ್ಮ ಜ್ಞಾನೋದಯ
ಬ್ರಹ್ಮಾನುಸಂಧಾನ
ಆತ್ಮಾನುಸಂಧಾನ
ಮುಮುಕ್ಷುಮನನ
ಸಾಧನಸೋಪಾನ
ಸುದರ್ಶನ
ಅದ್ವೈತ ಸಿದ್ಧಾಂತ
ಪ್ರಪಂಚ ಪರಿಚಯ
ದಕ್ಷಿಣಾಮೂರ್ತಿ ಸ್ತೋತ್ರ
ವಿಜ್ಞಾನಸಾರಭವ
ಗುರ್ವಷ್ಟಕ
ಸಾಧನ ಪಂಚಕ
ಕೌಪೀನ ಪಂಚಕ
ಬ್ರಹ್ಮಸೂತ್ರಾರ್ಥ ಪ್ರಕಾಶ
ಜನತಾ ರಾಮಾಯಣ
ಶಂಕರ ಹೃದಯ
ಶಂಕರ ಅಷ್ಟೋತ್ತರ ಶತ ನಾಮಾವಳಿ
ಪದ್ಮಪುರಾಣದ ಕಥೆಗಳು
ಲಲಿತಾಷ್ಟಕ
ಈಶಾವಾಸ್ಯೋಪನಿಷತ್ತು
ಕೇನೋಪನಿಷತ್ತು
ಕಠೋಪನಿಷತ್ತು
ಮುಂಡಕ ಮಾಂಡುಕ್ಯೋಪನಿಷತ್ತು
ತೈತ್ತಿರೀಯ ಮತ್ತು ಐತರೇಯೋಪನಿಷತ್ತು
ಛಾಂದೋಗ್ಯೋಪನಿಷತ್ತು (ಸರ್ಕಾರದಿಂದ ಧನ ಸಹಾಯ ಪಡೆದದ್ದು)
ವಿಷ್ಣು ಸಹಸ್ರನಾಮ ಶಂಕರ ಭಾಷ್ಯಾನುವಾದ
ಶಿವಸಹಸ್ರನಾಮಾನುವಾದ ಶಂಕರ ಭಾಷ್ಯಾನುವಾದ
ಪುರುಷಸೂಕ್ತ ಮತ್ತು ಶ್ರೀ ಸೂಕ್ತ